# ಕರ್ನಾಟಕ ವಿಧಾನ ಪರಿಷತ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 108

ಸದಸ್ಯರ ಹೆಸರು : ಶ್ರೀ ಕೆ.ಗೋವಿಂದರಾಜ್
(ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 21.09.2020

ಉತ್ತರಿಸುವ ಸಚಿವರು : ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಮಧ್ಯಾಹ್ನದ ಬಿಸಿಯೂಟ (Midday Meal) ಕಾರ್ಯಕ್ರಮದಡಿ ಕೆಲಸ ನಿರ್ವಹಿಸುತ್ತಿರುವ ನೌಕರರಿಗೆ ಕಳೆದ ಏಪ್ರಿಲ್ ತಿಂಗಳಿನಿಂದ ಸಂಬಳ ನೀಡದಿರುವುದು ನಿಜವೇ; | ಪ್ರತಿ ವರ್ಷದಂತೆ ಏಪ್ರಿಲ್ ಮತ್ತು ಮೇ ಮಾಹೆಗಳಿಗೆ ವೇತನ ಪಾವತಿಸಲು ಬರುವುದಿಲ್ಲ. 2020-21ನೇ ಸಾಲಿನಲ್ಲಿ ಜೂನ್, ಜುಲೈ ಮತ್ತು ಆಗಸ್ಟ್-2020ರ ಮಾಹೆಗಳಿಗೆ ಮಧ್ಯಾಹ್ನ ಉಪಹಾರ ಯೋಜನೆಯಡಿ ಕರ್ತವ್ಯ ನಿರ್ವಹಿಸುತ್ತಿರುವ 1,17,999 ಅಡುಗೆ ಸಿಬ್ಬಂದಿಗಳಿಗೆ 03 ತಿಂಗಳ ಸಂಭಾವನೆ **ರೂ 9345.76 ಲಕ್ಷಗಳನ್ನು** ಸರ್ಕಾರದ ಆದೇಶ ಸಂಖ್ಯೆ: ಇಪಿ 20 ಎಂಎಂಎಸ್ ದಿನಾಂಕ: 20-08-2020 ರನ್ವಯ ರಾಜ್ಯ ಎಲ್ಲಾ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಲಾಗಿದೆ. |
| ಆ) | ಈ ಅರೆಕಾಲಿಕ ನೌಕರರ ಸಂಬಳ ತಿಂಗಳಿಗೆ ರೂ 2600/- ರಿಂದ 2700/- ಆಗಿದ್ದು, ಕೋವಿಡ್-19ರ ಐಸೋಲೇಷನ್ ಕೇಂದ್ರಗಳಲ್ಲಿ ಕೆಲಸ ನಿರ್ವಹಿಸಿದ್ದು, ವಿದ್ಯಾರ್ಥಿಗಳಿಗೆ ಆಹಾರ ಪದಾರ್ಥಗಳ ಕಿಟ್ ಗಳನ್ನು ಹಂಚಿಕೆ ಮಾಡಿದ್ದರೂ ಇವರುಗಳಿಗೆ ಮಿಡ್ ಡೇ ಸಂಬಳವನ್ನಾಗಲೀ ಅಥವಾ ಲಾಕ್ ಡೌನ್ ಸಂಬಂಧದ ಪರಿಹಾರವನ್ನಾಗಲೀ ನೀಡಿಲ್ಲದಿರುವುದಕ್ಕೆ ಕಾರಣಗಳೇನು: (ವಿವರ ನೀಡುವುದು) | ಕೋವಿಡ್-19ರ ಐಸೋಲೇಷನ್ ಕೇಂದ್ರಗಳಲ್ಲಿ ಮಧ್ಯಾಹ್ನ ಬಿಸಿಯೂಟದ ನೌಕರರು ಕಾರ್ಯ ನಿರ್ವಹಿಸಿರುವ ಬಗ್ಗೆ ಶಿಕ್ಷಣ ಇಲಾಖೆಗೆ ಮಾಹಿತಿಯಿಲ್ಲ. ಈ ಬಗ್ಗೆ ಆಯಾ ಜಿಲ್ಲಾಧಿಕಾರಿಗಳು ಸೂಕ್ತ ಪ್ರಾಧಿಕಾರಿ ಆಗಿರುತ್ತಾರೆ. |
| ಇ) | ಇವರುಗಳನ್ನು ಪೂರ್ಣಕಾಲಿಕ ನೌಕರರೆಂದು ಪರಿಗಣಿಸಿ ಕನಿಷ್ಠ ಸಂಬಳ, ಸೇವಾ ಭದ್ರತೆ, ಆರೋಗ್ಯ ಭತ್ಯೆ ಹಾಗೂ ಪಿಂಚಣಿ ಸೌಲಭ್ಯ ದೊರಕಿಸಿಕೊಡುವುದು ಮುಖ್ಯವಾಗಿದ್ದು, ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮವೇನು? (ವಿವರ ನೀಡುವುದು) | ಮಧ್ಯಾಹ್ನ ಉಪಹಾರ ಯೋಜನೆಯಡಿ ಅಡುಗೆ ಸಿಬ್ಬಂದಿಗಳನ್ನು ತಾತ್ಕಾಲಿಕವಾಗಿ ನೇಮಕಾತಿ ಮಾಡಿಕೊಳ್ಳಲಾಗುತ್ತದೆ. ಅಡುಗೆ ಸಿಬ್ಬಂದಿಗಳು ಶಾಲೆಯಲ್ಲಿ ಪೂರ್ಣಕಾಲಿಕವಾಗಿ ಕೆಲಸ ನಿರ್ವಹಿಸದ ಕಾರಣ ಸದರಿ ಸಿಬ್ಬಂದಿಗಳಿಗೆ ಗೌರವ ಸಂಭಾವನೆಯನ್ನು ಪಾವತಿಸಲಾಗುತ್ತಿದೆ. ಆದುದರಿಂದ ಅಡುಗೆ ಸಿಬ್ಬಂದಿಗಳನ್ನು ಪೂರ್ಣಕಾಲಿಕ ನೌಕರರೆಂದು ಪರಿಗಣಿಸಿ ಕನಿಷ್ಟ ವೇತನ, ಭತ್ಯೆ |

| | | |
|---|---|---|
| | | ಮತ್ತು ಪಿಂಚಣಿ ಸೌಲಭ್ಯಗಳನ್ನು ನೀಡಲು ಅವಕಾಶವಿರುವುದಿಲ್ಲ.<br><br>ಆದರೆ 18 ರಿಂದ 40 ವರ್ಷ ವರ್ಷದೊಳಗಿನ ಎಲ್ಲಾ ಅಡುಗೆ ಸಿಬ್ಬಂದಿಗಳಿಗೆ ಕೇಂದ್ರ ಸರ್ಕಾರದ ಪ್ರಧಾನ ಮಂತ್ರಿ ಶ್ರಮ್ ಯೋಗಿ ಮಾನ್-ಧನ್ ಪಿಂಚಣಿ ಯೋಜನೆಯಡಿಯಲ್ಲಿ ನೋಂದಾಯಿಸಿಕೊಂಡು ಅಡುಗೆ ಸಿಬ್ಬಂದಿಗೆ 60 ವರ್ಷ ಪೂರ್ಣಗೊಂಡ ನಂತರ ಮಾಸಿಕ ರೂ 3000/-ಗಳ ಪಿಂಚಣಿ ಸೌಲಭ್ಯವನ್ನು ಪಡೆಯಲು ಅವಕಾಶವಿದ್ದು ಈ ಯೋಜನೆಯಡಿ ಅಡುಗೆ ಸಿಬ್ಬಂದಿಗಳನ್ನು ನೋಂದಾಯಿಸಲು ಕ್ರಮವಹಿಸಲಾಗಿದೆ.<br><br>ಅಡುಗೆ ಸಿಬ್ಬಂದಿಗಳಿಗೆ ಕರ್ತವ್ಯದ ಅವಧಿಯಲ್ಲಿ ಅಪಘಾತ/ಅವಘಡ ಸಂಭವಿಸಿದ್ದಲ್ಲಿ ಈ ಕೆಳಕಂಡಂತೆ ಪರಿಹಾರ ಒದಗಿಸಲಾಗುತ್ತದೆ.<br><br>• ಸರ್ಕಾರದ ಆದೇಶ ಸಂಖ್ಯೆ : ಇಡಿ 92 ಎಂ.ಎಂ.ಎಸ್ 2009, ಬೆಂಗಳೂರು, ದಿನಾಂಕ : 22.02.2010 (ಇಡಿ ಸ್ಪೀಮರ(ಯುನಿಕ್) 2010, ದಿನಾಂಕ : 22.02.2009) ರನ್ವಯ ಅಡುಗೆ ಸಿಬ್ಬಂದಿಯವರು ಅಡುಗೆ ಕೆಲಸ ನಿರ್ವಹಿಸುವ ಸಂದರ್ಭದಲ್ಲಿ ಸುಟ್ಟಗಾಯಗಳಾಗಿದಲ್ಲಿ ರೂ.30,000/-, ಶಾಶ್ವತ ಅಂಗವಿಕಲತೆ ಉಂಟಾದಲ್ಲಿ ಗರಿಷ್ಟ ರೂ.75,000/- ಮತ್ತು ಸುಟ್ಟಗಾಯಗಳಾಗಿ ಮರಣ ಹೊಂದಿದ ಸಂದರ್ಭದಲ್ಲಿ ರೂ.1,00,000/-ಗಳ ಪರಿಹಾರವನ್ನು ನೀಡಲಾಗುತ್ತಿದೆ.<br><br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವತಿಯಿಂದ ಅನುಷ್ಠಾನಗೊಂಡಿರುವ "ಆಯುಷ್ಮಾನ್ ಭಾರತ್ ಆರೋಗ್ಯ ಕರ್ನಾಟಕ" ಯೋಜನೆಯಡಿ ಅಡುಗೆಯವರು ನೋಂದಾಯಿಸಿಕೊಂಡು ಹೆಲ್ತ್‌ಕಾರ್ಡ್ ಪಡೆದು ಉಚಿತ ಆರೋಗ್ಯ ಸೇವೆಗಳನ್ನು ಪಡೆಯಬಹುದಾಗಿದೆ. |

ಇಪಿ 40 ಎಂಎಂಎಸ್ 2020

(ಎಸ್. ಸುರೇಶ್ ಕುಮಾರ್)

ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು